

## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 113(166) |
| ಸದಸ್ಯರ ಹೆಸರು | ಶ್ರೀ ಎಸ್.ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 03.03.2020 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮಾನ್ಯ ಗಣಿ ಮತ್ತು ಭೂವಿಜ್ಞಾನ ಇಲಾಖೆಯಿಂದ ಪರವಾನಗಿ ಪಡೆಯದೆ ಗಣಿಗಾರಿಕೆ ನಡೆಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗಣಿ ಮತ್ತು ಭೂವಿಜ್ಞಾನ ಇಲಾಖೆಯಿಂದ ಖನಿಜ ಗಣಿಗಾರಿಕೆಗೆ ಅಧಿಕೃತವಾಗಿ ಗುತ್ತಿಗೆ ಮಂಜೂರಾತಿ ನೀಡಿರುವ ವಿವರ ಈ ಕೆಳಕಂಡಂತಿರುತ್ತದೆ; (see table below) ಅಧಿಕೃತವಾಗಿ ಗಣಿಗಾರಿಕೆಗೆ ಗುತ್ತಿಗೆ ನೀಡಿರುವ ಪ್ರದೇಶಗಳನ್ನು ಹೊರತುಪಡಿಸಿ ಅನಧಿಕೃತವಾಗಿ ಕೆಲವು ಪ್ರದೇಶಗಳಲ್ಲಿ ಗಣಿಗಾರಿಕೆ ನಡೆಯುತ್ತಿರುವುದು ಕಂಡು ಬಂದಿರುತ್ತದೆ. |

| ಕ್ರ.ಸಂ. | ಖನಿಜದ ವಿಧ | ಗುತ್ತಿಗೆಗಳ ಸಂಖ್ಯೆ | ವಿಸ್ತೀರ್ಣ (ಎಕರೆಗಳಲ್ಲಿ) |
|---|---|---|---|
| 1 | ಮುಖ್ಯ ಖನಿಜ (ಕಬ್ಬಿಣದ ಅದಿರು) | **379** | **97107.28** |
| 2 | ನಿರ್ದಿಷ್ಟ ಉಪ ಖನಿಜ (ಗ್ರಾನೈಟ್) | **470** | **2353.06** |
| 3 | ನಿರ್ದಿಷ್ಟವಲ್ಲದ ಉಪ ಖನಿಜ (ಮರಳು ಹೊರತುಪಡಿಸಿ) | **2493** | **10567.31** |
| 4 | ಮರಳು | **281** | **3632.17** |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ಅಕ್ರಮವಾಗಿ ಗಣಿಗಾರಿಕೆ ನಡೆಸುತ್ತಿರುವವರ ವಿರುದ್ಧ ಯಾವ ರೀತಿಯ ಕ್ರಮ ಕೈಗೊಳ್ಳಲಾಗಿದೆ; (ಪೂರ್ಣ ವಿವರ ನೀಡುವುದು) | ಅಕ್ರಮವಾಗಿ ಗಣಿಗಾರಿಕೆ ನಡೆಸುತ್ತಿರುವವರ ವಿರುದ್ಧ ಎಂ.ಎಂ.(ಡಿ &ಆರ್) ಕಾಯ್ದೆ, 1957 ಮತ್ತು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994ರಂತೆ ಮೊಕದ್ದಮೆಗಳನ್ನು ದಾಖಲಿಸಲು ಕ್ರಮ ಜರುಗಿಸಲಾಗುತ್ತಿದೆ. ಕಳೆದ ಮೂರು ವರ್ಷಗಳಲ್ಲಿ ಅನಧಿಕೃತ ಕಲ್ಲು ಮತ್ತು ಮರಳು ಗಣಿಗಾರಿಕೆ ಸಂಬಂಧ ಕೈಗೊಂಡ ಕ್ರಮದ ವಿವರ ಕೆಳಕಂಡಂತಿದೆ: |

**ಮುಖ್ಯ ಖನಿಜ ಗಣಿಗಾರಿಕೆ :-**

| ಕ್ರ ಸಂ. | ವರ್ಷ | ಪತ್ತೆ ಹಚ್ಚಿದ ಪ್ರಕರಣಗಳು | ದಾಖಲಿಸಿರುವ ಮೊಕದ್ದಮೆಗಳ ಸಂಖ್ಯೆ | ವಸೂಲಾದ ದಂಡ (ರೂ.ಲಕ್ಷಗಳಲ್ಲಿ) |
|---|---|---|---|---|
| 1. | 2017-18 | 01 | - | 0.5 |
| 2. | 2018-19 | 05 | - | 2.0 |
| 3. | 2019-20 | 02 | - | - |

<table>
<tr><td></td><td></td><td>
ಕಲ್ಲು ಗಣಿಗಾರಿಕೆ :-
<table>
<tr><th>ಕ್ರ. ಸಂ.</th><th>ವರ್ಷ</th><th>ಪತ್ತೆ ಹಚ್ಚಿದ ಪ್ರಕರಣಗಳು</th><th>ದಾಖಲಿಸಿರುವ ಮೊಕದ್ದಮೆಗಳ ಸಂಖ್ಯೆ</th><th>ವಸೂಲಾದ ದಂಡ (ರೂ.ಲಕ್ಷಗಳಲ್ಲಿ)</th></tr>
<tr><td>1.</td><td>2017–18</td><td>404</td><td>114</td><td>613.25</td></tr>
<tr><td>2.</td><td>2018–19</td><td>413</td><td>108</td><td>1213.37</td></tr>
<tr><td>3.</td><td>2019–20</td><td>266</td><td>117</td><td>908.70</td></tr>
<tr><td></td><td>ಒಟ್ಟು</td><td>1083</td><td>339</td><td>2735.32</td></tr>
</table>
ಮರಳು ಗಣಿಗಾರಿಕೆ:-
<table>
<tr><th>ಕ್ರ. ಸಂ.</th><th>ವರ್ಷ</th><th>ಪತ್ತೆ ಹಚ್ಚಿದ ಪ್ರಕರಣಗಳು</th><th>ದಾಖಲಿಸಿರುವ ಮೊಕದ್ದಮೆಗಳ ಸಂಖ್ಯೆ</th><th>ವಸೂಲಾದ ದಂಡ (ರೂ.ಲಕ್ಷಗಳಲ್ಲಿ)</th></tr>
<tr><td>1.</td><td>2017–18</td><td>4007</td><td>2692</td><td>2073.36</td></tr>
<tr><td>2.</td><td>2018–19</td><td>3869</td><td>2893</td><td>910.38</td></tr>
<tr><td>3.</td><td>2019–20</td><td>1590</td><td>938</td><td>296.08</td></tr>
<tr><td></td><td>ಒಟ್ಟು</td><td>9466</td><td>6523</td><td>3279.82</td></tr>
</table>
</td></tr>
<tr><td>ಇ)</td><td>ಅಕ್ರಮವಾಗಿ ಗಣಿಗಾರಿಕೆ ನಡೆಸುತ್ತಿರುವುದರಿಂದ ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟಾಗುತ್ತಿಲ್ಲವೆ; ಇದ್ದಲ್ಲಿ ಎಷ್ಟು ನಷ್ಟವಾಗಿದೆ;</td><td>ಅಕ್ರಮವಾಗಿ ಗಣಿಗಾರಿಕೆ ನಡೆಸುತ್ತಿರುವವರ ವಿರುದ್ಧ ಎಂ.ಎಂ. (ಡಿ&ಆರ್) ಕಾಯ್ದೆ, 1957 ಮತ್ತು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994ರಂತೆ ಮೊಕದ್ದಮೆಗಳನ್ನು ದಾಖಲಿಸಿ ದಂಡವನ್ನು ಸಂಗ್ರಹಿಸಲಾಗುತ್ತಿರುತ್ತದೆ.</td></tr>
<tr><td>ಈ)</td><td>ಮರಳು ಮತ್ತು ಗಣಿಗೆ ಯಾವ ಮಾನದಂಡಗಳನ್ನು ಅನುಸರಿಸಲಾಗುತ್ತಿದೆ; ಪ್ರತ್ಯೇಕ ನಿಯಮಗಳನ್ನು ರೂಪಿಸಲಾಗಿದೆಯೇ; ಸಮರ್ಪಕವಾಗಿ ಅನುಷ್ಠಾನ ಆಗುತ್ತಿದೆಯೇ? (ವಿವರ ನೀಡುವುದು)</td><td>ಕೇಂದ್ರ ಸರ್ಕಾರವು ದಿನಾಂಕ 20.05.2015 ರಂದು ಜಾರಿಗೆ ತಂದಿರುವ The Mineral (Auction) Rules, 2015 ನಿಯಮಗಳನ್ವಯ ಖನಿಜಯುಕ್ತ ಗಣಿಗುತ್ತಿಗೆ ಪ್ರದೇಶಗಳನ್ನು ಗುರುತಿಸಿ ಖನಿಜ ನಿಕ್ಷೇಪವನ್ನು ಅಂದಾಜಿಸಿ ಸದರಿ ಪ್ರದೇಶಗಳನ್ನು ಇ-ಹರಾಜು ಮೂಲಕ ಗಣಿಗುತ್ತಿಗೆಗಳನ್ನು ಮಂಜೂರು ಮಾಡಲಾಗುತ್ತಿದೆ.<br><br>ರಾಜ್ಯ ಸರ್ಕಾರವು ದಿನಾಂಕ 12.08.2016 ರಂದು ಕರ್ನಾಟಕ ಉಪ ಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2016ನ್ನು ಜಾರಿಗೆ ತಂದಿದ್ದು, ಸದರಿ ನಿಯಮಗಳಂತೆ ಸರ್ಕಾರಿ ಜಮೀನುಗಳಲ್ಲಿ ಉಪಖನಿಜ ಗಣಿ ಗುತ್ತಿಗೆಗಳನ್ನು ಹರಾಜು ಮೂಲಕ ಮಂಜೂರು ಮಾಡಬೇಕಾಗಿರುತ್ತದೆ. ಪಟ್ಟಾ ಜಮೀನುಗಳಲ್ಲಿ ಲಭ್ಯವಿರುವ ಖನಿಜವನ್ನು ತೆಗೆಯಲು ಪಟ್ಟಾದಾರರಿಗೆ ಅಥವಾ ಪಟ್ಟಾದಾರರು ಒಪ್ಪಿಗೆ ನೀಡುವ ವ್ಯಕ್ತಿಗಳಿಗೆ ಕಲ್ಲು ಗಣಿಗಾರಿಕೆಗೆ ಲೈಸೆನ್ಸ್ ನೀಡಲಾಗುತ್ತಿದೆ.</td></tr>
</table>

| | | |
|---|---|---|
| | | ಕರ್ನಾಟಕ ಉಪ ಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2016 ರ ನಿಯಮ 31–R ರಂತೆ ಜಿಲ್ಲಾ ಮರಳು ಸಮಿತಿಯಿಂದ ನದಿ ಪಾತ್ರದಲ್ಲಿ ಮರಳು ಬ್ಲಾಕುಗಳನ್ನು ಗುರುತಿಸಿ ಮೀಸಲಾತಿಯನ್ನು ನಿಗದಿಪಡಿಸಿ ಅಧಿಸೂಚನೆ ಹೊರಡಿಸಿದ ನಂತರ ನದಿ ಪಾತ್ರದಲ್ಲಿರುವ ಮರಳು ನಿಕ್ಷೇಪಗಳನ್ನು ಸಾರ್ವಜನಿಕ ಟೆಂಡರ್ ಕಂ–ಹರಾಜು ಮೂಲಕ ವಿಲೇವಾರಿ ಮಾಡಲಾಗುತ್ತಿದೆ.<br><br>ಪಟ್ಟಾ ಜಮೀನುಗಳಲ್ಲಿ ಲಭ್ಯವಿರುವ ಖನಿಜವನ್ನು ತೆಗೆಯಲು ಪಟ್ಟಾದಾರರಿಗೆ ಅಥವಾ ಪಟ್ಟಾದಾರರು ಒಪ್ಪಿಗೆ ನೀಡುವ ವ್ಯಕ್ತಿಗಳಿಗೆ ಮರಳು ಗಣಿಗಾರಿಕೆಗೆ ಲೈಸೆನ್ಸ್ ನೀಡಲಾಗುತ್ತಿದೆ. |

ಸಂಖ್ಯೆ: ಸಿಐ 80 ಎಂಎಂಎನ್ 2020

(ಸಿ.ಸಿ. ಪಾಟೀಲ)

ಗಣಿ ಮತ್ತು ಭೂವಿಜ್ಞಾನ ಸಚಿವರು